# ಸಾರ್ವಜನಿಕ ಶಿಕ್ಷಣ ಎಂದರೇನು

ಮೂಲ: ಅನುರಾಗ್ ಬೇಹರ್

ಸಾರ್ವಜನಿಕ ಶಿಕ್ಷಣದಲ್ಲಿನ ಈ ಸಾರ್ವಜನಿಕ ಅಥವಾ ಪಬ್ಲಿಕ್ ಎಂದರೇನು? ಆ ಪ್ರಶ್ನೆಯೆಡೆಗೆ ಹೊರಳುವ ಮುನ್ನ, ಯುಕೆ ಮತ್ತು ಭಾರತದಲ್ಲಿ ಯಾವ ಶಾಲೆಗಳು ಪಬ್ಲಿಕ್[1] ಶಾಲೆಗಳು ಎಂದು ಕರೆಸಿಕೊಳ್ಳುತ್ತವೆಯೋ ಅವು, ಬಹುಮಟ್ಟಿಗೆ ಸಿರಿವಂತರಿಗೋಸ್ಕರ ಇರುವ ಖಾಸಗಿ ಶಾಲೆಗಳು ಎಂದು ಒಪ್ಪಿತವಾಗಿರುವ ಪದ ಪ್ರಯೋಗವೆಂಬುದನ್ನೂ ಮತ್ತು ಯಾವುದೇ ವಿಧದಿಂದಲೂ ಇವು ಸಾರ್ವಜನಿಕ ಶಿಕ್ಷಣ ಎಂಬುದರ ವ್ಯಾಪ್ತಿಯಲ್ಲಿ ಇಲ್ಲ ಎಂಬುದನ್ನು ಒತ್ತಿ ಹೇಳಬಹುದಾಗಿದೆ.

ಸರ್ಕಾರದ ತೆರಿಗೆಯ ಹಣದಿಂದ ನಡೆಯುವ ಮತ್ತು ಸರ್ಕಾರದ ಆಡಳಿತದಲ್ಲಿರುವ (“ನಿರ್ವಹಣೆ", “ನಡೆಸುವ”) ಶಾಲೆಗಳನ್ನು ಸಾರ್ವಜನಿಕ ಶಾಲೆಗಳೆಂದು ಹೇಳುತ್ತಾರೆ. ಪೂರ್ವ ಪ್ರಾಥಮಿಕದಿಂದ ಕಾಲೇಜಿನವರೆಗೆ ಎಲ್ಲವನ್ನೂ ಸೇರಿದಂತೆ ವಿಶಾಲ ಅರ್ಥದಲ್ಲಿ ನಾನು ಇಲ್ಲಿ ಶಾಲೆ ಎಂದು ಉಪಯೋಗಿಸಿದ್ದೇನೆ. ‘ಸರ್ಕಾರ’ ಎಂದರೆ ಅದರ ಎಲ್ಲ ಅಂಗಗಳೂ ಒಳಗೊಳ್ಳುತ್ತದೆ; ಸ್ವಾಯತ್ತ ಸಂಸ್ಥೆಗಳೂ, ಅಂತಿಮವಾಗಿ ವ್ಯವಸ್ಥೆಯ ಭಾಗವಾಗಿರುವುದೆಲ್ಲವೂ ‘ಸರ್ಕಾರ’ ಎನ್ನುವ ಪದದಲ್ಲಿ ಅಡಕಗೊಳ್ಳುತ್ತದೆ. ಹಣಕೂಡ, ಸ್ವಲ್ಪ ಪಾಲು ಶುಲ್ಕ ಮತ್ತು ಇತರೆ ರೀತಿಯಲ್ಲಿ ಶಾಲೆಯೇ ಕ್ರೋಢೀಕರಿಸಿರಬಹುದು, ಆದರೆ ಹೆಚ್ಚಿನಂಶ ಸರ್ಕಾರ ತೆರಿಗೆ ಹಣದಿಂದಲೇ ಪೂರೈಸುತ್ತದೆ. ಈ ರೀತಿಯ ಸಾರ್ವಜನಿಕ ಶಾಲೆಗಳೇ ಸಾರ್ವಜನಿಕ ಶಿಕ್ಷಣವನ್ನು ರೂಪಿಸುತ್ತವೆ.

ಸಾರ್ವಜನಿಕ ಶಿಕ್ಷಣ ಎಂಬ ಮಾತು ಬಳಸಿದಾಗ ಸಾಮಾನ್ಯವಾಗಿ ಗ್ರಹಿಸುವ ಅರ್ಥವೇ ಇದು. ಈ ಸಾಮಾನ್ಯ ಗ್ರಹಿಕೆಯು ಗಟ್ಟಿಯಾದ ಪಾತಳಿಯ ಮೇಲೆ ನಿಂತಿದೆ ಹಾಗೂ ಬಹಳಷ್ಟು ಸಂದರ್ಭಗಳಿಗೆ ಒಗ್ಗಿಕೊಳ್ಳುತ್ತದೆ. ಆದರೂ, ಇಂದು ನಾವು ಮುಖಾಮುಖಿಯಾಗಿರುವ ಸನ್ನಿವೇಶದಲ್ಲಿ ಈ ಗ್ರಹೀತವನ್ನು ಕೂಲಂಕಷವಾಗಿ ಪರಿಶೀಲಿಸಬೇಕಿದೆ. ಶಿಕ್ಷಣದಿಂದ ನಿರೀಕ್ಷೆಗಳು ಹೆಚ್ಚುತ್ತಿದ್ದರೂ, ಇಡೀ ಶಿಕ್ಷಣ ವ್ಯವಸ್ಥೆಯ ಬಗ್ಗೆ ಅತೃಪ್ತಿಯೂ ಹೆಚ್ಚಾಗುತ್ತಲೇ ಇದೆ. ಸರ್ಕಾರದ ಮೇಲಿನ ವಿತ್ತೀಯ ಒತ್ತಡಗಳು, ತಕ್ಷಣದ ಮತ್ತು ದೂರಗಾಮಿ ಕೆಡಕುಗಳನ್ನು ಲೆಕ್ಕಿಸದೇ, ಮಾರುಕಟ್ಟೆ ಆಧಾರಿತ ಸೇವೆ ನೀಡುವ ಖಾಸಗೀ ಮೂಲಗಳ ಮೂಲಕ ಸುಲಭೋಪಾಯಗಳನ್ನು ಕಂಡುಕೊಳ್ಳುತ್ತಿದೆ. ಇದು ಭಾರತಕ್ಕೆ ಮಾತ್ರ ಸೀಮಿತವಲ್ಲ, ಸಂದರ್ಭಗಳು ಬೇರೆ ಬೇರೆಯಾದರೂ ಕೂಡ, ಮೂಲದಲ್ಲಿ ಬಹಳಷ್ಟು ದೇಶಗಳಲ್ಲಿ ಇದೇ ಪರಿಸ್ಥಿತಿ ಇದೆ.

ನಾವು ಸಹಜವಾಗಿ ಸರ್ಕಾರೀ ಶಿಕ್ಷಣ (ಅಥವಾ ಸರ್ಕಾರೀ ಶಾಲೆ) ಎಂದು ಉಪಯೋಗಿಸದೇ ಕೇವಲ ಆ ಪದಗುಚ್ಛವನ್ನು ಮಾತ್ರ ಬಳಸುವುದರಿಂದ ನಮ್ಮ ಕಲ್ಪನೆಯ ಸಾರ್ವಜನಿಕ ಶಿಕ್ಷಣವೆಂಬುದರಲ್ಲಿ ಮಿತಿಯ ಸೂಚನೆ ಕಾಣಿಸುತ್ತದೆ. ಮೇಲೆ ಹೇಳಿದ ಸಾರ್ವಜನಿಕ ಶಿಕ್ಷಣದ ಕಲ್ಪನೆ ಪರಿಪೂರ್ಣವೂ ಮತ್ತು ಸಮರ್ಪಕವೂ ಅಗಿದ್ದಿದ್ದರೆ, ಅರ್ಥ ಮತ್ತು ಉದ್ದೇಶಕ್ಕೆ ಯಾವುದೇ ಧಕ್ಕೆಯಿಲ್ಲದಂತೆ. ಸರ್ಕಾರೀ ಶಿಕ್ಷಣ ಎಂದೇ ಉಪಯೋಗಿಸಬಹುದಿತ್ತು. ಈ ರೀತಿಯ ಶಿಕ್ಷಣವನ್ನು ಅನುಷ್ಠಾನಗೊಳಿಸಲು ಸರ್ಕಾರವೇ ಸಾಂಸ್ಥಿಕ ವ್ಯವಸ್ಥೆ ಎಂಬ

[1] ಇಲ್ಲಿ ಪಬ್ಲಿಕ್ (public) ಶಾಲೆ ಎಂದು ಆಂಗ್ಲ ಪದವನ್ನೇ ಬಳಸಿರುವುದಕ್ಕೆ ಕಾರಣವೆಂದರೆ ಈ ರೀತಿಯ ಶಾಲೆಗಳಿಗೆ 'ಪಬ್ಲಿಕ್ ಸ್ಕೂಲ್' ಎಂದೇ ಬಳಸಲಾಗುತ್ತಿದೆ.

ಸೂಕ್ತ ತಿಳಿವಳಿಕೆ ಸಹಜವಾಗಿ ಈ ಕಲ್ಪನೆಯನ್ನು ಕೊಟ್ಟಿದೆ ಹೊರತು ಈ ಬಗೆಯ ಶಿಕ್ಷಣವಾಗಲೀ, ಅದರಲ್ಲೂ ಸಾರ್ವಜನಿಕ ಶಿಕ್ಷಣವಾಗಲೀ ಅಲ್ಲ.

ಈ ವಾದವು, ನಮ್ಮನ್ನು ಸಾರ್ವಜನಿಕ ಶಿಕ್ಷಣವೆಂದರೇನೆಂಬ ಪ್ರಶ್ನೆಯೆಡೆಗೇ ಹೊರಳಿಸುತ್ತದೆ. ಇದರ ಮೂಲ ಕಲ್ಪನೆಯೆಂದರೆ ಇದು ಸಮಾನವಾಗಿ ಎಲ್ಲರಿಗೂ ಸಿಗುವಂತಹುದು ಎಂದೆನಿಸುತ್ತದೆ, ಆದ್ದರಿಂದಲೇ ಅದು ಸಾರ್ವಜನಿಕ. ಇದರಲ್ಲಿ ಅಡಕವಾಗಿರುವ ಮತ್ತೊಂದು ಮುಖ್ಯ ವಿಷಯವೆಂದರೆ, ಜನರೆಲ್ಲ ಒಂದು ವಿಷಯಕ್ಕೆ ಸಂಬಂಧಪಟ್ಟಂತೆ ಒಟ್ಟಾಗುವುದು. ಈ ವಿಷಯವಾದರೋ ಶಿಕ್ಷಣಕ್ಕೆ ಸಂಬಂಧಿಸಿದ್ದಾದ್ದರಿಂದ, ಜನರೆಲ್ಲ ಶಿಕ್ಷಣದಿಂದ ಅಗುವ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದಂತೆ ಕೈ ಜೋಡಿಸುವುದು. ಅಂದರೆ ಸಾರ್ವಜನಿಕ ಎಂಬ ಪ್ರಯೋಗವು ಯಾರಿಗಾಗಿ (ಎಲ್ಲರಿಗೂ ಸಮನಾಗಿ) ಮತ್ತು ಯಾಕಾಗಿ (ಸಾರ್ವಜನಿಕರ ಹಿತಕ್ಕಾಗಿ) ಎಂಬ ಎರಡು ಪ್ರಮುಖ ಅಂಶಗಳನ್ನು ಒಳಗೊಂಡಿದೆ.

ಎಲ್ಲರಿಗೂ ಸಮನಾಗಿ ದೊರೆಯುವುದು ಮತ್ತು ಸಾರ್ವಜನಿಕ ಹಿತವನ್ನೂ ಗಮನದಲ್ಲಿರಿಸುವುದು ಎಂಬ ನೆಲೆಯಿಂದ ನೋಡಿದರೆ, ಹೆಚ್ಚಿನ ಸಂದರ್ಭಗಳಲ್ಲಿ ಸರ್ಕಾರವೇ ಈ ಶಿಕ್ಷಣದ ಅನುಷ್ಠಾನಕ್ಕೆ ಅರ್ಹ ಎಂದು ಮನದಟ್ಟಾಗುತ್ತದೆ. ಸರ್ಕಾರೀ ಶಿಕ್ಷಣವೆಂಬುದು ಒಂದು ಕಾರ್ಯವಿಧಾನವೇ ಹೊರತು ಅದೇ ಸಾರ್ವಜನಿಕ ಶಿಕ್ಷಣವಲ್ಲ. ಅತಿಶಯದ ಸಂದರ್ಭವೊಂದನ್ನು ಗಮನಿಸಿದರೆ ಈ ಅಂಶ ಹೆಚ್ಚು ಸ್ಪಷ್ಟ ವಾಗಬಹುದು. ಒಂದು (ಕಾಲ್ಪನಿಕ) ನಿರಂಕುಶ ಪ್ರಭುತ್ವದಲ್ಲಿ, ಸರ್ಕಾರೀ ಶಿಕ್ಷಣ ವ್ಯವಸ್ಥೆಯು ಸರಕಾರ ಮತ್ತು ಅದರ ಹಿಡಿತವನ್ನು ಬೆಂಬಲಿಸುವುದನ್ನೇ ವಿದ್ಯಾರ್ಥಿಗಳಿಗೆ ಉಪದೇಶಿಸುತ್ತದೆ. ಇದು ಸರ್ಕಾರೀ ಶಿಕ್ಷಣ ಆದರೆ, ಸಾರ್ವಜನಿಕ ಶಿಕ್ಷಣವಲ್ಲ. ಅಂತಹ ಸರ್ಕಾರವು ಇದನ್ನು ಸಾರ್ವಜನಿಕ ಶಿಕ್ಷಣವೆಂದೇ ಹೆಸರಿಸಬಹುದಾದರೂ, ಅದು ಅವರ ಕಲ್ಪನೆಯ ಒಳ್ಳೆಯ ಸಮಾಜವನ್ನೇ ಆಧರಿಸಿರುವಂತಹುದು, ಅಂದರೆ ಸ್ವಾತಂತ್ರ, ಸ್ವಾಯತ್ತತೆ, ಸಮಾನತೆ ಇವೆಲ್ಲವುಗಳನ್ನು ಒಳಗೊಂಡಿರುವುದಿಲ್ಲ.

ಜನರ ಹಿತವನ್ನು ಹೆಚ್ಚಿಸುವುದಕ್ಕಾಗಿ, ಶಿಕ್ಷಣವು ಅದಕ್ಕೆ ತಕ್ಕುದಾದ ಗುರಿಗಳನ್ನು ಹೊಂದಿರಬೇಕು. ಆ ಗುರಿಗಳೇ ಸಾರ್ವಜನಿಕ ಶಿಕ್ಷಣದ ಪರಿಕಲ್ಪನೆಯ ಕೇಂದ್ರದಲ್ಲಿರುವುದು. ಶೈಕ್ಷಣಿಕ ಪ್ರಕ್ರಿಯೆಗಳು ಮತ್ತು ವ್ಯವಸ್ಥೆಗಳ ಮೂಲಕ, ಹಾಗೂ ಪ್ರಮುಖವಾಗಿ ಪಠ್ಯಕ್ರಮದ ಮೂಲಕ ಈ ಗುರಿಗಳನ್ನು ಸಾಧಿಸಲಾಗುತ್ತದೆ (ಮತ್ತು ವ್ಯಕ್ತವಾಗುತ್ತದೆ). ಜನರ ಹಿತವನ್ನು ಬೆಂಬಲಿಸುವ ಕೆಲ ಗುರಿಗಳ ಬಗ್ಗೆ ಸಂಕ್ಷಿಪ್ತವಾಗಿ ಈಗ ಗಮನ ಹರಿಸೋಣ. ಒಂದೆಡೆ, ಪ್ರಾಪಂಚಿಕ ಜ್ಞಾನ ಮತ್ತು ಅರ್ಥಪೂರ್ಣ ಬದುಕನ್ನು ಬಾಳಬಲ್ಲ ಸ್ವತಂತ್ರ, ಯೋಚನಾಬದ್ಧ ಮತ್ತು ಕಾರ್ಯತತ್ಪರ ವ್ಯಕ್ತಿಗಳನ್ನಾಗಿ ಬೆಳೆಸುವುದು. ಮತ್ತೊಂದೆಡೆ, ನ್ಯಾಯಯುತ, ಅಂತಃಕರಣವುಳ್ಳ, ಮಾನವೀಯ ಮತ್ತು ಸುಸ್ಥಿರ ಸಮಾಜವನ್ನು ಬೆಳೆಸುವುದೂ ಕೂಡ ಈ ಗುರಿಗಳಲ್ಲಿ ಸೇರಿದೆ. ಗುರಿಗಳ ಈ ಎರಡೂ ಸೂತ್ರಗಳು ಒಟ್ಟಾಗಿ ಜನರ ಹಿತವನ್ನು ಹೆಚ್ಚಿಸುತ್ತವೆ . ಪ್ರತಿಯೊಬ್ಬರಿಗೂ ಈ ತೆರನಾದ ಶಿಕ್ಷಣ ಸಮಾನವಾಗಿ ದೊರೆತರೆ ಮಾತ್ರ, ಶಿಕ್ಷಣದ ಗುರಿ ಮುಟ್ಟಲು ಸಾಧ್ಯವಾದ್ದರಿಂದ, ಪ್ರತಿಯೊಬ್ಬರಿಗೂ ಆ ರೀತಿಯ ಶಿಕ್ಷಣ ದೊರೆಯುವುದು ಈ ನಿಟ್ಟಿನಲ್ಲಿ ಮತ್ತೂ ಸ್ಪಷ್ಟವಾಗುತ್ತದೆ.

ಒಮ್ಮೆ ನಾವು ಸಾರ್ವಜನಿಕ ಶಿಕ್ಷಣವನ್ನು ಈ ದೃಷ್ಟಿಕೋನದಿಂದ ನೋಡಿದಾಗ, ಶಿಕ್ಷಣವು ಯಾವುದೇ ಸಮಾಜಕ್ಕೂ ಅತೀ ಮುಖ್ಯ ಎನ್ನುವುದು ನಿಚ್ಚಳವಾಗುತ್ತದೆ. ಜನರು ಮತ್ತು ಸಮಾಜದ ಬೆಳವಣಿಗೆಗೆ, ಶಿಕ್ಷಣವೇ ಅತೀ ಮುಖ್ಯವಾದ (ಬಹುಶಃ ಅದೊಂದೇ) ವ್ಯವಸ್ಥಿತವಾಗಿ ಮತ್ತು ಗುರಿಯೆಡೆಗೆ ದಿಕ್ಕುತೋರುವ ಪ್ರಕ್ರಿಯೆ. ಸಾರ್ವಜನಿಕ ಶಿಕ್ಷಣವು ಸಮಾಜಕ್ಕೆ ಮತ್ತು ಪ್ರಜಾಪ್ರಭುತ್ವಕ್ಕೆ ತಳಪಾಯವಾಗುತ್ತದೆ.

ಶಿಕ್ಷಣದ ಸಮಂಜಸವಾದ ಗುರಿಗಳನ್ನು ಮತ್ತು ಪಠ್ಯಕ್ರಮದ ಮೇಲಿನ ಅದರ ಪ್ರಭಾವವನ್ನು ವಿಶ್ಲೇಷಿಸಿಯಾದ ಮೇಲೆ, ನಾವೀಗ ಗುರಿಗಳು ಮತ್ತು ಪಠ್ಯಕ್ರಮದ ಮೂಲಕ ಸಾರ್ವಜನಿಕ ಶಿಕ್ಷಣದ ಮೇಲೆ ನಡೆಯುತ್ತಿರುವ ಒಂದು ಬಗೆಯ ದಾಳಿಯನ್ನು (ಅಥವಾ ಭಯಬೀಳುವುದನ್ನು) ಗಮನಿಸೋಣ. ಕೆಲವು ಗುಂಪುಗಳ ಹಿತಾಸಕ್ತಿಗಳಿಗೆ ಹೊಂದಲು ಅಥವಾ ಯಾವುದೋ ಸಿದ್ಧಾಂತದ ಖಯಾಲಿಗಳನ್ನು ಪೋಷಿಸಲು ಪಠ್ಯದ ಗುರಿ ಅಥವಾ ವಿಷಯಗಳನ್ನು ಬದಲಾಯಿಸುವುದರಿಂದ, ಸಾರ್ವಜನಿಕ ಶಿಕ್ಷಣ ಸಾರ್ವಜನಿಕವಾಗಿ ಉಳಿಯುವುದಿಲ್ಲ. ಸಮಾಜದಲ್ಲಿ ಮತ್ತು ಪ್ರಜಾಪ್ರಭುತ್ವದಲ್ಲಿ ಅದರ ಪ್ರಮುಖ ಪಾತ್ರವೂ ಶಿಥಿಲಗೊಳ್ಳುತ್ತದೆ. ಇಂತಹ ಪ್ರಯತ್ನಗಳು ಪ್ರಾಯಶಃ ಉದ್ದೇಶಪೂರಿತ ಎಂದರಿವಾಗುತ್ತದೆ ಮತ್ತು ಆ ಪ್ರಯತ್ನಗಳಿಗ ಪ್ರತಿರೋಧ ವ್ಯಕ್ತವಾಗುತ್ತದೆ.

ಸಮಾಜದ ಬಲು ದೊಡ್ಡ ಗುಂಪು ಒಂದು ಬಗೆಯ ಪಲ್ಲಟವನ್ನು ಪ್ರತಿಪಾದಿಸುತ್ತಿದ್ದರೂ ಸಹ, ಅದಕ್ಕೆ ತಕ್ಕುದಾದ ಪ್ರತಿರೋಧ ಕಾಣುತ್ತಿಲ್ಲ. ಶಿಕ್ಷಣದ ಧ್ಯೇಯದೆಡೆಗಿನ ಚಿಂತನಗಳಾಗಿ ಕಾಣುವ, ಇವು ಕೊನೆಯಲ್ಲಿ ಪಠ್ಯದ ಭಾಗವಾಗುತ್ತವೆ. “ಶಿಕ್ಷಣವು ನಮ್ಮ ಆರ್ಥ ವ್ಯವಸ್ಥೆಯನ್ನು ಹೆಚ್ಚು ಚಲನಶೀಲವಾಗಿಸಬೇಕು", “ಶಿಕ್ಷಣವು ಉದ್ಯೋಗ ಸಾಮರ್ಥ್ಯವನ್ನು ಹೆಚ್ಚಿಸಬೇಕು" ಎಂಬಿತ್ಯಾದಿ ಘೋಷ ವಾಕ್ಯಗಳಿವು. ಈ ಘೋಷಣೆಗಳು ತಮ್ಮಷ್ಟಕ್ಕೇ ನಿರುಪದ್ರವಿಗಳಾದರೂ, ಹಲವು ಬಾರಿ ವ್ಯಕ್ತವಾಗುವ (ಮತ್ತು ಯಾವಾಗಲೂ ಅವ್ಯಕ್ತವಾಗಿರುವ) ಉದ್ದೇಶವೆಂದರೆ ಶಿಕ್ಷಣದ ಆರ್ಥಿಕ ಗುರಿಗಳಿಗೇ ಉಳಿದೆಲ್ಲವುಗಳಿಗಿಂತ ಪ್ರಾಮುಖ್ಯತೆಯನ್ನು ನೀಡಬೇಕೆಂಬುದು.

ಆರ್ಥಿಕ ಧ್ಯೇಯಗಳು ಸಾರ್ವಜನಿಕ ಶಿಕ್ಷಣದ ಅವಿಭಾಜ್ಯ ಅಂಗ. ಜನರು ಸಾರ್ಥಕ್ಯ ಜೀವನ ನಡೆಸುವುದು ಶಿಕ್ಷಣದ ಧ್ಯೇಯವಾದ್ದರಿಂದ, ಆರ್ಥಿಕ ಸಧೃಢತೆಯೂ ತಕ್ಕ ಪ್ರಮಾಣದಲ್ಲಿ ಗುರಿಯಲ್ಲಿ ಅಡಕವಾಗಿರಬೇಕು. ಆದರೆ, ಆರ್ಥಿಕ ಧ್ಯೇಯಗಳಿಗೇ ಸತತವಾಗಿ ಒತ್ತು ನೀಡುವುದರಿಂದ, ಇತರ ಧ್ಯೇಯಗಳು ದುರ್ಬಲಗೊಂಡು, ಸಾರ್ವಜನಿಕ ಶಿಕ್ಷಣವನ್ನು ಆತಂಕಕ್ಕೆ ದೂಡುತ್ತದೆ. ಶಿಕ್ಷಣವು ಮಾರುಕಟ್ಟೆಯ (ಮತ್ತದರ ಪ್ರಮುಖ ಗುಂಪುಗಳ) ಧ್ಯೇಯೋದ್ದೇಶಗಳನ್ನು ಪೋಷಿಸುತ್ತದೆಯೇ ಹೊರತು, ಸಾರ್ವಜನಿಕ ಹಿತವನ್ನಲ್ಲ. ಇದು ಕಣ್ಣಿಗೆ ಕಾಣುವ ಇತರ ದಾಳಿಗಳಷ್ಟೇ ಘಾತಕತನದ್ದು.

ನಾವೀಗ ಮತ್ತೊಂದು ಬಹು ಚರ್ಚಿತ ವಿಷಯವನ್ನು ಗಮನಿಸೋಣ – ಖಾಸಗೀ ಮತ್ತು ಸರ್ಕಾರೀ[2] ಶಿಕ್ಷಣ ಹಾಗೂ ಖಾಸಗೀ ಶಾಲೆಗಳು ಸಾರ್ವಜನಿಕ ಶಿಕ್ಷಣವನ್ನು ನೀಡಬಲ್ಲುದೇ ಎಂಬುದು.

ಎರಡು ಮೂಲ ನಿಯಮಗಳನ್ನು ಅನುಸರಿಸಿದಲ್ಲಿ, ಸಾರ್ವಜನಿಕ ಉದ್ದೇಶದ ಖಾಸಗೀ ಶಾಲೆಯು ಸಾರ್ವಜನಿಕ ಶಿಕ್ಷಣವನ್ನು ನೀಡಬಹುದು (ಅಥವಾ ಅದರ ಭಾಗವಾಗಿರಬಹುದು) ಎಂಬುದು ತಾತ್ವಿಕವಾಗಿ ಸರಿಯಾಗಿ ತೋರುತ್ತದೆ. ಮೊದಲಿಗೆ, ಅದು ಜನರ ಹಿತಕ್ಕಾಗಿ ಯೋಜಿಸಿದ ಪಠ್ಯಕ್ರಮವನ್ನು ಬಳಸಬೇಕು, ಎರಡನೆಯದಾಗಿ, ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳ ಹೊರತಾಗಿ ಎಲ್ಲರಿಗೂ ಒಂದೇ ತೆರನಾಗಿ ಶಿಕ್ಷಣ ದೊರೆಯಬೇಕು.

[2] ಈ ಸಂದರ್ಭದಲ್ಲಿ ಶಾಲೆಗಳ ಬಗೆಗಳಿಗೆ ಹೊಂದುವ ಕಾರಣದಿಂದ. Public ಎನ್ನುವಲ್ಲಿ "ಸಾರ್ವಜನಿಕ" ಬದಲಿಗೆ "ಸರ್ಕಾರೀ" ಎಂದು ಬಳಸಲಾಗಿದೆ.

ವಿದ್ಯಾರ್ಥಿಗಳಿಂದಲೇ ಖರ್ಚು, ವೆಚ್ಚಗಳನ್ನು ಪಡೆಯಬೇಕೆಂದರೆ, ಎರಡನೆಯ ನಿಯಮವನ್ನು ಖಾಸಗೀ ಶಾಲೆಗಳು ಪಾಲಿಸಲಸಾಧ್ಯ. ಏಕೆಂದರೆ, ಆರ್ಥಿಕವಾಗಿ ದುರ್ಬಲರು ಹೊರಗುಳಿಯುತ್ತಾರೆ. ಹಾಗಾಗೇ ಸಮುದಾಯದ ಹಣದಿಂದ ನಡೆಯುವ ಖಾಸಗೀ ಶಾಲೆಗಳ ಕಲ್ಪನೆ ಮೂಡಿದ್ದು , ಒಂದರ್ಥದಲ್ಲಿ ಸಾರ್ವಜನಿಕ ಶಿಕ್ಷಣವನ್ನು ನೀಡುತ್ತಿದೆ.

ನಮ್ಮ ದೇಶದ ಉದ್ದಗಲಕ್ಕೂ (ಮತ್ತು ಹೊರಗೂ) ದಿಟ್ಟಿಸಿದಾಗ ನಿಸ್ಸಂಶಯವಾಗಿ ಸಾರ್ವಜನಿಕ ಹಿತದ ಚಿಂತನೆಯ ಖಾಸಗೀ ಶಾಲೆಗಳು ಕಂಡುಬರುತ್ತವೆ. ಇದರಲ್ಲಿ ಕೆಲವು ಸರ್ಕಾರದ ನೆರವಿನಿಂದ ನಡೆಯುತ್ತಿದ್ದರೆ, ಇನ್ನುಳಿದವು ದಾನ ಧರ್ಮದಿಂದ. ಇವು ಆ ಎರಡು ನಿಯಮಗಳನ್ನು ಅನುರಿಸಲು ಶ್ರಮವಹಿಸುತ್ತವೆ ಹಾಗಾಗಿ ಸಾರ್ವಜನಿಕ ಶಿಕ್ಷಣದ ಭಾಗವಾಗುತ್ತವೆ. ಆದರೆ, ಇಂತಹವು ಬೆರಳೆಣಿಕೆಯಷ್ಟು ಮಾತ್ರ.

ಖಾಸಗೀ ಶಾಲೆಗಳಲ್ಲಿ ಹೆಚ್ಚಿನವು ಸಾರ್ವಜನಿಕ ಹಿತದ ಚಿಂತನೆಗಿಂತ ಲಾಭದ ಬಗೆಗಿನ ಯೋಚನೆಯವು. ಅವು ತಮ್ಮ ಪಠ್ಯಕ್ರಮವನ್ನು ಸಾರ್ವಜನಿಕ ಹಿತಕ್ಕಿಂತ ಮುಖ್ಯವಾಗಿ, ತಮ್ಮ ಮಾರುಕಟ್ಟೆಯ ಅಗತ್ಯಕ್ಕೆ ತಕ್ಕಂತೆ ಕುಗ್ಗಿಸುತ್ತವೆ. ಒಳ್ಳೆಯ ಶಿಕ್ಷಣ ಮತ್ತು ನಿಯಂತ್ರಣ ಮಂಡಳಿ ವಿಧಿಸಿದ ಪಠ್ಯಕ್ರಮದ ಅಗತ್ಯಗಳಿಗೆ ಬಾಯುಪಚಾರದ ಸೇವೆ ಸಲ್ಲಿಸುತ್ತವೆ.. ಅಲ್ಲಿ ಎಲ್ಲರಿಗೂ ಸಮಾನ ಅವಕಾಶಗಳಿರುವುದಿಲ್ಲ. ಆರ್ಥಿಕ ಅಡೆತಡೆಗಳಷ್ಟೇ ಅಲ್ಲದೇ, ಬಹಳಷ್ಟು ಸಾಮಾಜಿಕ ಅಡಚಣೆಗಳೂ ( ಶೈಕ್ಷಣಿಕ ಮಟ್ಟದ ಹೆಸರಿನಲ್ಲಿ) ಇರುತ್ತವೆ. ಈ ಪ್ರತ್ಯೇಕತೆಯನ್ನು ಅವರ ಸಂಸ್ಥೆಯ ಖ್ಯಾತಿಯ ಪ್ರಮುಖ ಭಾಗವನ್ನಾಗಿ ಪರಿಗಣಿಸುತ್ತಾರೆ, ಅದರಿಂದಲೇ ಅ ವ್ಯವಹಾರ ಲಾಭದಾಯಕವಾಗುವುದು. ಇಂತಹ ಬಹಳ ಶಾಲೆಗಳಲ್ಲಿ ಸಾರ್ವಜನಿಕ ಶಿಕ್ಷಣದ ಮಾತಂತಿರಲಿ, ಶಿಕ್ಷಣದ ಬಗ್ಗೆಯೇ ಇಲ್ಲವೇ ಇಲ್ಲ ಎನ್ನುವಷ್ಟು ಅತೀ ಕಡಿಮೆ ಕಳಕಳಿ ಇರುತ್ತದೆ.

ಉದ್ದೇಶಪೂರಿತವಾಗಿ ಕಣ್ಣು ಕಿವಿಗಳನ್ನು ಮುಚ್ಚಿದ್ದರೆ ಮಾತ್ರ ಭಾರತದಲ್ಲಿನ ಖಾಸಗೀ ಶಾಲೆಗಳ ಈ ಸತ್ಯವನ್ನು ಅಲ್ಲಗಳೆಯಬಹುದು. ಇನ್ನು "ಕಲಿಕಾ ಮಟ್ಟ"ದ ವಿಷಯದಲ್ಲೂ ಖಾಸಗೀ ಶಾಲೆಗಳು, ಸರ್ಕಾರೀ ಶಾಲೆಗಳಿಗಿಂತ ಉತ್ತಮವಾಗೇನೂ ಇಲ್ಲ ಎಂದು ಸ್ಪಷ್ಟವಾಗಿದೆ.[2,3,4] ಮಾರುಕಟ್ಟೆಯ ಮೂಲಭೂತತೆಯ ಮನಸ್ಥಿತಿಯಿಂದ ದಾರಿ ತಪ್ಪದೆ, ಕೇವಲ ಮಾರುಕಟ್ಟೆಯ ಮೂಲತತ್ವಗಳನ್ನು ಪರಿಗಣಿಸಿ ನೋಡಿದರೆ,ಇದು ಆಶ್ಚರ್ಯಕರವೂ ಅಲ್ಲ ಮತ್ತು ನಿರೀಕ್ಷಿಸಬಹುದಾದಂತದ್ದೇ. ಖಾಸಗಿಯವರು ಶಾಲೆಯನ್ನು ನಡೆಸುವುದು ಖಾಸಗೀ ಉದ್ದೇಶಗಳಾದ (ಕೆಲವು ಶಾಲೆಗಳನ್ನು ಹೊರತು ಪಡಿಸಿ) ಉದಾ: ಲಾಭ, ಘನತೆ-ಗೌರವ, ರಾಜಕೀಯ ಪ್ರಭಾವ ಮುಂತಾದವುಗಳಿಗೆ ಎಂಬುದು ಈ ಮೂಲತತ್ವ. ಕೆಲವರು ಮಾತ್ರ ಈ ಉದ್ದೇಶಗಳನ್ನು ಬಹಿರಂಗವಾಗಿ ಒಪ್ಪುತ್ತಾರೆ, ಉಳಿದವರು ಸಾರ್ವಜನಿಕ ಹಿತದ ಪರದೆಯ ಹಿಂದೇ ಇರುತ್ತಾರೆ. ಅದು ಅಷ್ಟೇ - ಪರದೆ. ಸಾರ್ವಜನಿಕ ಹಿತಕ್ಕಾಗಿ ಹುಟ್ಟು ಹಾಕದ, ಅದಕ್ಕಾಗಿ ನಡೆಸದ ಸಂಸ್ಥೆಗಳು ಮೂಲ ಉದ್ದೇಶದ ವಿರುದ್ಧವಾಗಿ, ಪವಾಡ ಸದೃಶವಾಗಿ ಸಾರ್ವಜನಿಕ ಹಿತವನ್ನು ಸೃಷ್ಟಿಮಾಡಲಾರವು, ಖಾಸಗೀ ಶಾಲೆಗಳು ಸಾರ್ವಜನಿಕ ಶಿಕ್ಷಣವನ್ನು ನೀಡಲಾರವು.

ಹಾಗಾಗಿ, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯು ಕೇವಲ ಸರ್ಕಾರೀ ಶಾಲಾ ವ್ಯವಸ್ಥೆಯ ಮುಖಾಂತರ ಮಾತ್ರ ಸಾಧ್ಯ. ಸರ್ಕಾರೀ ಶಾಲಾ ವ್ಯವಸ್ಥೆಯು ಯಾವಾಗಲೂ ಸಾರ್ವಜನಿಕ ಶಿಕ್ಷಣವಾಗದಿದ್ದರೂ, ಸಾರ್ವಜನಿಕ ಶಿಕ್ಷಣವಂತೂ ಸರಿಯಾದ ಸರ್ಕಾರೀ ಶಾಲಾ ವ್ಯವಸ್ಥೆಯಿಂದ ಮಾತ್ರ ಸಾಧ್ಯ. ಅದರೊಟ್ಟಿಗೆ, ಸಾರ್ವಜನಿಕ ಶಿಕ್ಷಣವು ನಮ್ಮ ಮೂಲಭೂತ ಆಶಯವಾದ ಒಳ್ಳೆಯ ಸಮಾಜದ ನಿರ್ಮಾಣಕ್ಕೆ ಮೂಲವೂ ಮತ್ತು ಪ್ರಜಾಪ್ರಭುತ್ವದ ಅಡಿಪಾಯವೂ ಹೌದು.

ಭಾರತದಲ್ಲಿ ಸರ್ಕಾರೀ ಶಾಲಾ ವ್ಯವಸ್ಥೆಯನ್ನು ಸಶಕ್ತಗೊಳಿಸಬೇಕು ಮತ್ತು ಉತ್ತಮಪಡಿಸಬೇಕು. ಇದಕ್ಕೆ ಯಾವುದೇ ಅಡ್ಡದಾರಿಗಳಾಗಲೀ, ಸುಲಭೋಪಾಯಗಳಾಗಲೀ ಇಲ್ಲ. ನಮ್ಮ ಸಂವಿಧಾನದಲ್ಲಿ ನಾವು ನಮಗೇ ಭರವಸೆ ನೀಡಿದಂತಹ ಒಳ್ಳೆಯ ಸಮಾಜ ನಿರ್ಮಾಣಕ್ಕೂ ಯಾವುದೇ ಅಡ್ಡದಾರಿಗಳಿಲ್ಲ.

---

ಅಡಿ ಟಿಪ್ಪಣಿ: ಎಲ್ಲ ಟಿಪ್ಪಣಿಗಳೂ (ಮತ್ತು ಅದರ ಉಲ್ಲೇಖ) ಮೂಲ ಲೇಖಕರು ಮಿಂಟ್ ಪತ್ರಿಕೆಗೆ ಬರೆದ ಅಂಕಣಗಳನ್ನು ಸೂಚಿಸುತ್ತದೆ. ಅವು ಅಂತರ್ಜಾಲ ತಾಣದಲ್ಲಿ ಲಭ್ಯವಿದೆ.

(http://www.livemint.com/).

1. ‘Cost of Privatized Education’, April 17, 2013
2. ‘Ideology of Education’, October 30, 2013
3. ‘Myths of Priavtopia’, December 25, 2013
4. ‘Market no fix for Education’, October 28, 2015